ಎಚ್. ಎಸ್. ಗೋಪಾಲರಾಯ

# ರಂಗನಾಥಪುರದ ತಾಮ್ರಪತ್ರ

ಪ್ರಸ್ತುತ ಪ್ರಸ್ತಾಪಿಸಲಿರುವ ತಾಮ್ರಶಾಸನಕ್ಕೆ ಸಂಬಂಧಿಸಿದಂತೆ ಆರಂಭದಲ್ಲೇ ತಿಳಿಸಬೇಕಾಗಿರುವುದೆಂದರೆ, ಇದನ್ನು 'ರಂಗನಾಥಪುರದ ತಾಮ್ರಪತ್ರ' ಎಂದು ಕರೆಯಲಾದರೂ ಹಾಲಿ ಇದು ದೊರೆತಿರುವ ರಂಗನಾಥಪುರಕ್ಕೂ ಇದರಲ್ಲಿ ಪ್ರಸ್ತಾಪಿತವಾಗಿರುವ ಊರುಗಳಿಗೂ ಯಾವ ಸಂಬಂಧವೂ ಇದ್ದಂತೆ ತೋರುವುದಿಲ್ಲ. 'ಜಯರೇಖೆ' ಮತ್ತು 'ಧಾರ್ಮಿಕ ಒಪ್ಪಂದ'ಗಳ ಈ ಶಾಸನವು ದೇಶಭಾಗದವರ ಸಾಹಸ ಮತ್ತು ಒಪ್ಪಂದವನ್ನು ತಿಳಿಸುತ್ತದೆ.

ತುಮಕೂರು ಜಿಲ್ಲೆಯ ಶಿರಾ ತಾಲ್ಲೂಕು ಬುಕ್ಕಾಪಟ್ಟಣ ಹೋಬಳಿ ರಂಗನಾಥಪುರ ಗ್ರಾಮದ ಪಕ್ಕದಲ್ಲಿರುವ ಶ್ರೀ ಮರಡಿ ರಂಗನಾಥಸ್ವಾಮಿಯ ಅರ್ಚಕರಾದ ಮುದಿಗೆರೆಯ ಶ್ರೀ ರಂಗಪ್ಪ, ಕಳ್ಳಂಬೆಳ್ಳದ ಶ್ರೀ ಮುದ್ದಪ್ಪ ಅವರುಗಳ ವಶದಲ್ಲಿದ್ದ ಈ ತಾಮ್ರಪತ್ರವನ್ನು ಶಿರಾದ ಕ. ವಿ. ಮಂಡಳಿಯ ಕಛೇರಿಯಲ್ಲಿ ಕ್ಯಾಷಿಯರ್ ಆಗಿರುವ ಮುದಿಗೆರೆಯ ಶ್ರೀ ಅನಂತರಾಜಪ್ಪ ಅವರು ಪರಿಶೀಲನೆಗೆ ಒದಗಿಸಿದ್ದಾರೆ.

೨೫.೫ ಸೆಂ. ಮಿ. ಉದ್ದ ಮತ್ತು ೧೨ ಸೆಂ.ಮಿ. ಅಗಲವಿರುವ ಒಂದೇ ಒಂದು ತಾಮ್ರಪತ್ರದ ಮೇಲೆ ಈ ಶಾಸನವನ್ನು ಕೊರೆಯಲಾಗಿದೆ. ಶಾಸನದ ಮೇಲ್ಭಾಗದಲ್ಲಿ ಎಡಭಾಗದಲ್ಲಿ ಚಕ್ರವೂ ಬಲಭಾಗದಲ್ಲಿ ಶಂಖವೂ ಮಧ್ಯೆ ನಾಮವೂ ಕೊರೆಯಲ್ಪಟ್ಟಿವೆ. ಚಕ್ರ ಮತ್ತು ನಾಮಗಳ ನಡುವೆ 'ಶ್ರೀ' ಎಂದೂ ನಾಮ ಮತ್ತು ಶಂಖಗಳ ನಡುವೆ 'ರಾಮಾ' ಎಂದೂ ಬರೆಯಲಾಗಿದೆ. ಶಾಸನಗಳ ಆರಂಭದಲ್ಲಿ ಕೊರೆಯಲಾಗಿರುವ ಚಿಹ್ನೆಗಳ ಮೂಲಕವೇ ಇದು ಶ್ರೀ ವೈಷ್ಣವ ಸಂಪ್ರದಾಯದ ಜನರಿಗೆ ಸಂಬಂಧಿಸಿದ ಶಾಸನ ಎನ್ನುವುದು ಸ್ಪಷ್ಟವಾಗುತ್ತದೆ.

ಶಾಸನದಲ್ಲಿ 'ಕಟ್ಟೇಮನೆ ಗೌಡರು', 'ವುಪ್ಪಾರದೈವದವರು' ಮತ್ತು 'ದೇಶಭಾಗದವರು' ಪ್ರಸ್ತಾಪಿತರಾಗಿದ್ದಾರೆ. ಅದರಲ್ಲಿ ಪ್ರಮುಖವಾಗಿ ದೇಶಭಾಗದವರು 'ಗುರುವಾಂಚಲ್ಯ' ಮತೀಯ ಮುದ್ರೆಗಳನ್ನು ರಕ್ಷಿಸಿದ ಕೀರ್ತಿ ಮತ್ತು ಮುದ್ರೆಕರ್ತರೊಂದಿಗಿನ ಒಪ್ಪಂದವನ್ನು ವಿವರಿಸಲಾಗಿದೆ. ಮೂರೂ ಪಂಗಡದವರು ಶ್ರೀ ವೈಷ್ಣವ ಧರ್ಮವನ್ನೇ ಅನುಸರಿಸುವವರು ಎಂಬುದು ತಿಳಿದ ಸಂಗತಿ. ವುಪ್ಪಾರ ಜನಾಂಗದವರು ತಮ್ಮನ್ನು ತಾವು ಸಕ್ಕರೆಯ ಕುಲದವರು-ಸಗರದವರು[1] ಎಂದೂ ಕರೆದುಕೊಳ್ಳುತ್ತಾರೆಂದು ಸಿ. ಹಯವದನರಾಯರ ಮೈಸೂರು ಗೆಜೆಟಿಯರ್‌ನ ಸಂಪುಟ–೧ ರಿಂದ ತಿಳಿಯುತ್ತದೆ. ಈ ಶಾಸನದಲ್ಲೂ ಸಗರದ ವುಪ್ಪಾರದೈವದವರು ಎಂದೇ ಉಲ್ಲೇಖಿಸಲಾಗಿದೆ.

ಈ ಶಾಸನದ ಪ್ರಕಾರ, ಕಟ್ಟೇಮನೆ ಗೌಡರು ಮತ್ತು ಸಗರದ ವುಪ್ಪಾರದೈವದವರ ಮುದ್ರೆಕರ್ತರು ಮಾತ್ರ ಮುಸವನೂರ ದೇವಾಲಯದಲ್ಲಿದ್ದರು. ನಂತರ ದೇಶಭಾಗದವರು ಆ ಮುದ್ರೆಕರ್ತರನ್ನು ಒಪ್ಪಿಕೊಂಡರು.

---

1. ಮೈಸೂರು ಗೆಜೆಟಿಯರ್, ಸಂ. ೧, ಸಿ. ಹಯವದನರಾವ್

**ಶಾಸನದ ಪಾಠ**

ಶ್ರೀ[2] ರಾಮಾ[3]

೧ ಶ್ರೀಮತೆ ರಾಮಾನುಜಾಯ ನಮಃ
೨ ತಿರುಮಲ ತಾಥಾಚಾರ್‍ಯ್ಯರ ಮುಖಾಂತ್ರ ಮುಸವನೂರ
೩ ತಿರುಮಾಳಿಗೆಯಲ್ಲು ಯಿರುವಂತ ಮುಧ್ರೆಕರ್ತರು । ಪುರುಶಾಕಾ
೪ ರಿ ಕ್ರಿಷ್ಣೈಯ । ರಾಮಾನೂಜೈಯ್ಯನವರ ಮೂಖಾಂತ್ರ ॥
೫ ಕಟ್ಟಿಮನೆಗೌಡರು । ಸಗರದ ವುಪ್ಪಾರ ದ್ಯೆವದವರ ಮು
೬ ಖಾತ್ರ । ಹಾದದು ಸಹಜ । ಸರದಾರ ಗೊಕಿಲ್ಯನ ಮೇಲೆ ಮಾಡಿ
೭ ದ ಕಾರ್‍ಯ್ಯ । ಸ್ತಾಳದ ಹನುಮ ದಾಸಾ । ಸಿರೆದ ಯಿಾರ ದಾಸಾ । ದಂ
೮ ಡಿನ ತೊಳಸಿ ರಾಮದಾಸಾ । ಯಿ ದೇಶಭಾಗದವರ ಕಂಡು । ಹಾ । ಗೊಕಿಲೆ
೯ ಕೂವಾಡ ಮಾಡಿ । ಶೆಂಕು ಜಾಗಟೆ ಸಸ್ಯಗಳಂನು । ಕಸುಕೊ ಬೆಕು
೧೦ ಯಂತ ಕುವಾಡ ಮಾಡಲಿಕಾಗಿ । ಹದಕ್ಕೆ ಸ್ತಳದ ವನುಮ ದಾಸಾ ।
೧೧ ಸಸ್ಯವಡದನು । ಯಿರದಾಸಾ ಬಾಕು ಕಿತ್ತೂ ಪವಾಡ ಮಾಡುತ ನಿಂ
೧೨ ತ್ತನು । ತುಳಸಿ ರಾಮಾದಾಸಾ । ಬಿಕರ ಮಾಡುತ ನಿಂತನು । ಯಿದ ಕಂ
೧೩ ಡು ಹಾ ಸರಧಾರ ಯದರ್‍ರಿ । ಸಾಷ್ಟಂಗ ಬಿದ್ದು । ನಂನಿಂದ ಹಪರಾದ
೧೪ ವಾಯಿತ್ತೆಂದು । ವಿಳ್ಯಂವೆಂನು ಕೊಟ್ಟನು । ಹಾ ವಿಳ್ಯವಂನು ತಕೊಂ
೧೫ ಡು । ಹ ಸ್ತಳದ ಮುದ್ರೆಕರ್ತರಲ್ಲಿಗೆ । ಯಿ ದೇಶ ಭಾಗದವರು ಬಂದರು ।
೧೬ ಯಿ ಮಕ್ಕಳು ಗುರು ವಾಂಚಲ್ಯಕ್ಕೆ ಕಿರ್ತಿ ತರ್‍ರಿಶಿದರು ಯಂದು । ಹ
೧೭ ಳದಿ ಬಿಳದಿ ಭಾರಿಯಷ್ಮು ಬಿರುದಂನ್ನು ಸಿರ್‍ರೆದಾ ಯಿರದಾಸಗೆ
೧೮ ಕೊಟ್ಟದು ಸಹಜ । ಹಾ ಸ್ತಾಳದಲ್ಲಿ ದೇಶ ಭಾಗದ ಕವಳ ಯಿಾ
೧೯ ರ ದಾಸನ್ನು ಕೊಟ್ಟದು ಸಹಜ । ದೇಶಮುದ್ರೆ ಕರ್ತ । ದಳವಾಯಿ
೨೦ ಯಿಾ ಯಿಕ್ಕರ್ತರು ಕೂಡಿ । ಸ್ತಳದ ಕವಳನಂತ್ತು ಕೊಟೆ । ಯಿಂನು
೨೧ ದಿಕ್ಕು ದೇಶ ಭಾಗದ ಕವಳ ನಂ ಮುಖಾಂತ್ರ ಕೊಡುಯಂದಲ್ಲಿ
೨೨ ಹಾನಗಲ್ಲ ಸ್ತಳದಲ್ಲು । ಸಮೆ ಕೊಮಾರ ಗುಂಮಗಟ್ಟಿ ಬಿಯದಾ
೨೩ ಸ್ಯೆಯ । ದಳವಾಯಿ ಹನುಮ ದಾಸ್ಯೆಯ್ಯ । ಚರಪತ್ತಿ ರಾಮದಾ
೨೪ ಸ್ಯೆಯ । ಮತ್ತು ಯಿರುವಂತ್ತ ಲಂಡಪುಂಡ ದೆಶಾಬಾಗಕ್ಕೆ । ಸ
೨೫ ಹಾ । ಯಿಾ । ಯಿಾರದಾಸನೂ ದೆಶಬಾಗದ ಕವಳ ಕೊಟ್ಟದು ಸಹ
೨೬ ಜ । ಯಿದಕ್ಕೆ । ಯಿ ದೆಶ ಬಾಗದವರ । ಮತ್ತು ಯಾರಾದರ್‍ರು
೨೭ ಹಿಂಡಿದು ಕೆಳಲಾಗದು । ಕೆಳಿದಲ್ಲಿ ತಿರುಮಲತಾಥ ಸಾ
೨೮ ಮುದ್ರೆಗೆ ಬಾರಸ್ತರು ।
೨೯ ಪಿಂಗಳ ನಾಮ ಸಂ । ರದ ಪುಶ್ಯ ಶು ೫ ಶನಿವಾರಾದ
೩೦ ಲ್ಲು ರುಜು ಶ್ರೀ ರಾಮಾ ॥

---

2. ಚಕ್ರ ಮತ್ತು ನಾಮಗಳ ನಡುವೆ
3. ನಾಮ ಮತ್ತು ಶಂಖಗಳ ನಡುವೆ

**ಸಾರಾಂಶ**

ರಾಮಾನುಜರ ಸ್ಮರಣೆಯೊಂದಿಗೆ ಆರಂಭವಾಗುವ ಶಾಸನವು ಮುಸವನೂರ ದೇವಾಲಯದಲ್ಲಿ ತಿರುಮಲೆ ತಾಥಾಚಾರ್ಯರ ಮುಖಾಂತರ ಇರುವ ಮುದ್ರೆಕರ್ತರನ್ನು ಪ್ರಸ್ತಾಪಿಸುತ್ತದೆ. ರಾಮಾನುಜೈಯನವರ ಮುಖಾಂತರ ಪುರುಷಾಕಾರಿ ಕೃಷ್ಣಯ್ಯ ಮತ್ತು ಸಗರದ ವುಪ್ಪಾರದೈವದವರ ಮುಖಾಂತರ ಕಟ್ಟೆಮನೆ ಗೌಡರು ಮುದ್ರೆ ಕರ್ತರಾಗಿದ್ದುದು ಸಹಜ. ಮುಂದುವರಿದ ಶಾಸನವು ಸರದಾರ ಗೊಕಿಲ್ಯನ ಮೇಲೆ ನಡೆದ ಕಾರ್ಯವನ್ನು ತಿಳಿಸುತ್ತದೆ. ಸರದಾರ ಗೊಕಿಲ್ಯನು ಸ್ಥಳದ ಹನುಮದಾಸ, ಸಿರೆದ ಯಿರಾರದಾಸ ಮತ್ತು ದಂಡಿನ ತೊಳಸಿ ರಾಮದಾಸಾ ಎಂಬ ಮೂವರು ದೇಶಭಾಗದವರನ್ನು ಕಂಡು (ಮುದ್ರೆ ಕರ್ತರ ಬಳಿಯಿರುವ) ಶೆಂಕು ಜಾಗಟೆ ಸಸ್ಯಗಳನ್ನು ಕಸಿದುಕೊಳ್ಳುವಂತೆ ಕುವಾದ ಮಾಡುತ್ತಾನೆ. ಆಗ ಸ್ತಳದ ಹನುಮದಾಸ ಸಸ್ಯ ವಡದನು. ಯಿರಾರದಾಸ ಬಾಕು ಕಿತ್ತು ಪವಾಡ ಮಾಡಿದನು. ತುಳಸಿ ರಾಮದಾಸ ಬಿಕರ ಮಾಡುತ್ತ ನಿಂತನು. ಇದನ್ನು ಕಂಡ ಸರದಾರ (ಗೊಕಿಲ್ಯ) ಹೆದರಿ ಸಾಷ್ಟಾಂಗ ನಮಸ್ಕರಿಸಿ 'ನನ್ನಿಂದ ಅಪರಾಧ ಆಯಿತು' ಎಂದು ವೀಳ್ಯವನ್ನು ಕೊಟ್ಟನು. ಆ ವೀಳ್ಯವನ್ನು ತೆಗೆದುಕೊಂಡು ದೇಶಭಾಗದ ಮೂರು ಜನರೂ ಸ್ತಳದ ಮುದ್ರೆ ಕರ್ತರಲ್ಲಿಗೆ ಬಂದಾಗ, ಮುದ್ರೆಕರ್ತರು 'ಗುರುವಾಂಚಲ್ಯಕ್ಕೆ ಕೀರ್ತಿ ತರಿಸಿದ' ಮೂವರನ್ನೂ ಮೆಚ್ಚಿ ಸಿರದ ಯಿರಾರದಾಸನಿಗೆ ಹಳದಿ ಬಿಳದಿ ಭಾರಿಯಷ್ಟು ಬಿರುದನ್ನು ಕೊಟ್ಟರು. ಆಗ ಸಿರಧ ಯಿರಾರದಾಸನು ದೇಶಭಾಗದ ಕವಳವನ್ನು ನೀಡಿದ. ದೇಶಮುದ್ರೆ ಕರ್ತ, ದಳವಾಯಿ ಮತ್ತಿತರ ಕರ್ತರು ಕೂಡಿ ಸಿರದ ಯಿರಾರದಾಸನಿಗೆ ನೀನು ಸ್ತಳದ ಕವಳವನ್ನಂತೂ ಕೊಟ್ಟೆ. ಇನ್ನು ಸುತ್ತಮುತ್ತಿನ (ದಿಕ್ಕು) ದೇಶಭಾಗದ ಕವಳವನ್ನೂ ನಮ್ಮ ಮುಖಾಂತರ ಕೊಡು ಎಂದಾಗ ಹಾನಗಲ್ಲು ಸ್ತಳಧ ಸಮೆಕೊಮಾರ, ಗು ೦ ಮ ಗ ಟ್ಟಿ ಬಿಯದಾಸ್ಯೆಯ, ದಳವಾಯಿ ಹನುಮ ದಾಸೈಯ್ಯ, ಚರಪತ್ತಿ ರಾಮದಾಸಯ್ಯ ಮತ್ತಿತರ ಎಲ್ಲಾ ವರ್ಗದ ದೇಶಭಾಗಕ್ಕೆ ಸಹಯಿರಾರದಾಸನು ದೇಶಭಾಗದ ಕವಳ ಕೊಟ್ಟದು ಸಹಜ. ಇದಕ್ಕೆ ಈ ದೇಶಭಾಗದವರನ್ನು ಯಾರೂ ಹಿಡಿದು ಕೇಳಲಾಗದು. ಕೇಳಿದರೆ ತಿರುಮಲ ತಾಥ ಸಾಮುದ್ರೆಗೆ ಬಾರಸ್ತರು.

ಪಿಂಗಳನಾಮ ಸಂ॥ರದ ಪುಶ್ಯ ಶುದ್ಧ ೫ ಶನಿವಾರದಲ್ಲು ರುಜು-ರುಜು ಶ್ರೀರಾಮಾ ಎಂದಿದೆ.

**ವಿವರಣೆ**

ಶಾಸನದ ಆರಂಭದಲ್ಲೇ ಚಕ್ರ, ನಾಮ ಮತ್ತು ಶಂಖಗಳನ್ನು ಕೊರೆದಿರುವುದರಿಂದ ಮತ್ತು ಶ್ರೀರಾಮಾ ಎಂದು ಬರೆದಿರುವುದರಿಂದ ಇದು ಶ್ರೀವೈಷ್ಣವ ಧರ್ಮದ ವಿಷಯಕ್ಕೆ ಸಂಬಂಧಿಸಿದ ಶಾಸನ ಎಂಬುದು ಸ್ಪಷ್ಟವಾಗುತ್ತದೆ. ನಂತರ ರಾಮಾನುಜರ ಸ್ಮರಣೆಯೊಂದಿಗೆ ಮುಂದುವರಿದ ಶಾಸನ ಉಲ್ಲೇಖಿಸುವ ತಿರುಮಲ ತಾಥಾಚಾರ್ಯರು ಕನಕದಾಸರು ಮೋಹನ ತರಂಗಿಣಿಯಲ್ಲಿ ಸ್ತುತಿಸಿರುವ ತಾತಾಚಾರಿಯರೇ ಇರಬೇಕು.4 ರಾಮಾನುಜಾಚಾರ್ಯರ ನಂತರ ವೈಷ್ಣವ ಧರ್ಮದ ಏಳಿಗೆಗಾಗಿ ಶ್ರಮಿಸಿದ ತಾತಾಚಾರ್ಯರ ವಂಶದವರು ವಿಜಯನಗರದ ಆಸ್ಥಾನದಲ್ಲಿ ಬಹಳ ಪ್ರಭಾವಶಾಲಿಗಳಾಗಿದ್ದು, ನಂತರ ಕ್ರಿ.ಶ. ೧೬೬೩ರ ಸುಮಾರಿನಲ್ಲಿ ಮೈಸೂರು ಒಡೆಯರ ಆಶ್ರಯದಲ್ಲಿ ನೆಲೆಸಿದರು. ರಾಜರ ಆಶ್ರಯ ಪಡೆದಿದ್ದ ತಾತಾಚಾರ್ಯರ ವಂಶದವರು ಶ್ರೀ ವೈಷ್ಣವ ಧರ್ಮದ ಅಭಿವೃದ್ಧಿಗೆ ಸಲ್ಲಿಸಿರುವ ಸೇವೆ ಗಣನೀಯ ಪ್ರಮಾಣದ್ದೇ ಆಗಿದೆ.5 ಈ ಶಾಸನದ ಮೂಲಕ ತಿರುಮಲೆಯ ತಾಥಾಚಾರ್ಯರಿಗೆ ಮುದ್ರೆಕರ್ತರನ್ನು ನೇಮಿಸುವ ಅಧಿಕಾರವೂ ಇತ್ತೆಂದು ತಿಳಿಯಬಹುದಾಗಿದೆ. ಇವರ ಮುಖಾಂತರ ಮುಸವನೂರಿನ ದೇವಾಲಯ(ತಿರುಮಾಳಿಗೆ) ದಲ್ಲಿದ್ದ ಮುದ್ರೆಕರ್ತರು ಎರಡು ಪಂಗಡಗಳವರಿಂದ ಮಾನ್ಯತೆ ಪಡೆದಿದ್ದರು. ಕಟ್ಟೆಮನೆಯವರು ಸಗರದ ವುಪ್ಪಾರದೈವದವರಿಂದಲೂ ರಾಮಾನುಜೈಯ್ಯನವರಿಂದ ಪುರುಷಾಕಾರಿ ಕೃಷ್ಣಯ್ಯನೂ ಮುದ್ರೆಕರ್ತರಾಗಿದ್ದರು. ಈ ಮುದ್ರೆಕರ್ತರನ್ನು ದೇಶ

4. ಕನಕ-ಕಿರಣ : ಸಂ. : ಕಾ. ತ. ಚಿಕ್ಕಣ್ಣ, ಲೇ : ಕನಕದಾಸರ ಕಾಲ, ದೇಶ, ಮತ ಮತ್ತು ಜೀವನ-ಡಾ॥ ಜಿ. ವರದರಾಜರಾವ್
5. ಹಿಸ್ಟರಿ ಆಫ್ ಮೈಸೂರ್ ಸಂ.೧, ಅ : ೧೦

**ಶಾಸನದ ಪಾಠ**

ಶ್ರೀ[2] ರಾಮಾ[3]

೧ ಶ್ರೀಮತೆ ರಾಮಾನುಜಾಯ ನಮಃ

೨ ತಿರುಮಲ ತಾಥಾಚಾರ್‍ಯರ ಮುಖಾಂತ್ರ ಮುಸವನೂರ

೩ ತಿರುಮಾಳಿಗೆಯಲ್ಲು ಯಿರುವಂತ ಮುಧ್ರೆಕರ್ತರು । ಪುರುಶಾಕಾ

೪ ರಿ ಕ್ರಿಷ್ಣೈಯ । ರಾಮಾನೂಜೈಯ್ಯನವರ ಮೂಖಾಂತ್ರ ॥

೫ ಕಟ್ಟಿಮನೆಗೌಡರು । ಸಗರದ ವುಪ್ಪಾರ ದೈವದವರ ಮು

೬ ಖಾತ್ರ । ಹಾದದು ಸಹಜ । ಸರದಾರ ಗೊಕಿಲ್ಯನ ಮೇಲೆ ಮಾಡಿ

೭ ದ ಕಾರ್ಯ್ಯ । ಸ್ತಾಳದ ಹನುಮ ದಾಸಾ । ಸಿರಿದ ಯಿರ ದಾಸಾ । ದಂ

೮ ಡಿನ ತೊಳಸಿ ರಾಮದಾಸಾ । ಯಿ ದೇಶಭಾಗದವರ ಕಂಡು । ಹಾ । **ಗೊಕಿಲೆ**

೯ ಕೂವಾಡ ಮಾಡಿ । ಶೆಂಕು ಜಾಗಟೆ ಸಸ್ಯಗಳಂನು । ಕಸುಕೊ ಬೆಕು

೧೦ ಯಂತ ಕುವಾಡ ಮಾಡಲಿಕಾಗಿ । ಹದಕ್ಕೆ ಸ್ತಳದ ವನುಮ ದಾಸಾ ।

೧೧ ಸಸ್ಯವಡದನು । ಯಿರದಾಸಾ ಬಾಕು ಕಿತ್ತೂ ಪವಾಡ ಮಾಡುತ ನಿಂ

೧೨ ತ್ತನು । ತುಳಸಿ ರಾಮಾದಾಸಾ । ಬಿಕರ ಮಾಡುತ ನಿಂತನು । ಯಿದ ಕಂ

೧೩ ಡು ಹಾ ಸರಧಾರ ಯದರ್‍ರಿ । ಸಾಷ್ಟಂಗ ಬಿದ್ದು । ನಂನಿಂದ ಹಪರಾದ

೧೪ ವಾಯಿತ್ತೆಂದು । ವಿಳ್ಯಂವೆಂನು ಕೊಟ್ಟನು । ಹಾ ವಿಳ್ಯವಂನು ತಕೊಂ

೧೫ ಡು । ಹೆ ಸ್ತಳದ ಮುದ್ರೆಕರ್ತರಲ್ಲಿಗೆ । ಯಿ ದೇಶ ಭಾಗದವರು ಬಂದರು ।

೧೬ ಯಿ ಮಕ್ಕಳು ಗುರು ವಾಂಚಲ್ಯಕ್ಕೆ ಕಿರ್ತಿ ತರ್‍ರಿಶಿದರು ಯಂದು । ಹ

೧೭ ಳದಿ ಬಿಳದಿ ಭಾರಿಯಷ್ಟು ಬಿರುದಂನ್ನು ಸಿರ್‍ರೆದಾ ಯಿರದಾಸಗೆ

೧೮ ಕೊಟ್ಟದು ಸಹಜ । ಹಾ ಸ್ತಾಳದಲ್ಲಿ ದೇಶ ಭಾಗದ ಕವಳ ಯಿಾ

೧೯ ರ ದಾಸನ್ನು ಕೊಟ್ಟದು ಸಹಜ । ದೇಶಮುದ್ರೆ ಕರ್ತ । ದಳವಾಯಿ

೨೦ ಯಿಾ ಯಿಕ್ಕರ್ತರು ಕೂಡಿ । ಸ್ತಳದ ಕವಳನಂತ್ತು ಕೊಟೆ । ಯಿಂನು

೨೧ ದಿಕ್ಕು ದೇಶ ಭಾಗದ ಕವಳ ನಂ ಮುಖಾಂತ್ರ ಕೊಡುಯಂದಲ್ಲಿ

೨೨ ಹಾನಗಲ್ಲ ಸ್ತಳದಲ್ಲು । ಸಮೆ ಕೊಮಾರ ಗುಂಮುಗಟ್ಟಿ ಬಿಯದಾ

೨೩ ಸೈಯ । ದಳವಾಯಿ ಹನುಮು ದಾಸೈಯ್ಯ । ಚರಪತ್ತಿ ರಾಮದಾ

೨೪ ಸೈಯ । ಮತ್ತು ಯಿರುವಂತ್ತ ಲಂಡಪುಂಡ ದೆಶಾಬಾಗಕ್ಕೆ । ಸ

೨೫ ಹಾ । ಯಿಾ । ಯಿಾರದಾಸನೂ ದೆಶಬಾಗದ ಕವಳ ಕೊಟ್ಟದು ಸಹ

೨೬ ಜ । ಯಿದಕ್ಕೆ । ಯಿ ದೆಶ ಬಾಗದವರ । ಮತ್ತು ಯಾರಾದರ್‍ರು

೨೭ ಹಿಂಡಿದು ಕೆಳಲಾಗದು । ಕೆಳಿದಲ್ಲಿ ತಿರುಮಲತಾಥ ಸಾ

೨೮ ಮುದ್ರೆಗೆ ಬಾರಸ್ತರು ।

೨೯ ಪಿಂಗಳ ನಾಮ ಸಂ । ರದ ಪುಶ್ಯ ಶು ೫ ಶನಿವಾರಾದ

೩೦ ಲ್ಲು ರುಜ್ರು ಶ್ರೀ ರಾಮಾ ॥

---

2. ಚಕ್ರ ಮತ್ತು ನಾಮಗಳ ನಡುವೆ
3. ನಾಮ ಮತ್ತು ಶಂಖಗಳ ನಡುವೆ

ಭಾಗದವರೂ ಒಪ್ಪಿಕೊಂಡ ವಿಷಯವನ್ನು ಈ ಶಾಸನವು ತಿಳಿಸುತ್ತದೆ.

ಕಟ್ಟೆಮನೆಯವರು, ವುಪ್ಪಾರದೈವದವರು ಮತ್ತು ದೇಶಭಾಗದವರೆಲ್ಲರೂ ಶ್ರೀ ವೈಷ್ಣವ ಸಂಪ್ರದಾಯಕ್ಕೇ ಸೇರಿದ ಪಂಗಡಗಳವರು.

ಕಟ್ಟೆಮನೆಯವರು ಮತ್ತು ವುಪ್ಪಾರದೈವದವರ ಮಟ್ಟಿಗೆ ಮುದ್ರೆಕರ್ತರಾಗಿದ್ದ ಮುಸುವನೂರ ದೇವಾಲಯದಲ್ಲಿನ ಮುದ್ರೆಕರ್ತರ ಬಳಿಯ ಮುದ್ರೆಗಳನ್ನು ಅಥವಾ ಶಂಖ, ಜಾಗಟೆ, ತುಳಸಿ(ಸಸ್ಯ)ಗಳನ್ನು ಕಸಿದುಕೊಳ್ಳಲು ಸರದಾರ ಗೊಕಿಲ್ಯನೆಂಬುವನು ದೇಶಭಾಗದವರೊಡನೆ ಕುವಾದ ಮಾಡಿದ ಸಂದರ್ಭದಲ್ಲಿ ಸ್ತಳದ ಹನುಮದಾಸ, ಸಿರದ ಯೀರದಾಸ ಮತ್ತು ದಂಡಿನ ತೊಳಸಿ ರಾಮದಾಸ ಅವರು ಸರದಾರ ಗೊಕಿಲ್ಯನನ್ನು ವಿರೋಧಿಸಿದರು. ಶೌರ್ಯ ಪ್ರದರ್ಶನದಿಂದ ಪವಾಡ ಮಾಡಿದರು. ಆಗ ಸರದಾರ ಗೊಕಿಲ್ಯನು ಹೆದರಿ, ತನ್ನ ಅಪರಾಧವನ್ನು ಒಪ್ಪಿಕೊಂಡು, ವೀಳ್ಯವನ್ನು ನೀಡಿದನು.

ಶಂಖ, ಚಕ್ರಗಳು ಶ್ರೀ ವೈಷ್ಣವ ಮುದ್ರೆಗಳೆಂದು ಪರಿಗಣಿತವಾಗಿವೆ. ಆದರೆ ಈ ಶಾಸನದಲ್ಲಿ ಚಕ್ರವನ್ನು ಉಲ್ಲೇಖಿಸದೆ ಜಾಗಟೆಯನ್ನು ಉಲ್ಲೇಖಿಸಲಾಗಿದೆ. ಬಹುತೇಕ ದೇಶಭಾಗದವರು ಸಾಮಾನ್ಯವಾಗಿ ದಾಸಯ್ಯಗಳೆಂದು ಕರೆದುಕೊಂಡು ದೇಶಾವಾರದ ವೃತ್ತಿಯನ್ನವಲಂಬಿಸಿ ಶಂಖ, ಜಾಗಟೆಗಳನ್ನೇ ಹೆಚ್ಚು ಬಳಸುವುದರಿಂದ ಅವರಿಗೆ ಸಂಬಂಧಿಸಿದ ಈ ಶಾಸನದಲ್ಲಿ ಶಂಖ, ಜಾಗಟೆಗಳನ್ನೇ ಉಲ್ಲೇಖಿಸಲಾಗಿದೆ ಎಂದು ಭಾವಿಸಬಹುದು. ಸಸ್ಯಗಳನ್ನು ಕುರಿತು 'ಬೆಳೆ' ಎಂಬ ಅರ್ಥದಲ್ಲಿ ಸ್ವೀಕರಿಸಬಹುದೆಂಬ ಅಭಿಪ್ರಾಯವಿದ್ದರೂ ಶ್ರೀ ವೈಷ್ಣವರಿಗೆ ಬಹಳ ಪವಿತ್ರವಾದ ತುಳಸಿಯೇ ಈ ಶಾಸನದಲ್ಲಿ ಉಕ್ತವಾಗಿರುವ 'ಸಸ್ಯ'ದ ಅರ್ಥವೆಂದು ತಿಳಿಯಲಾಗಿದೆ.

ದೇಶಭಾಗದವರನ್ನು ಕುವಾದದಿಂದ ಕೆಣಕಿ, ಮುದ್ರೆಗಳನ್ನು ಕಸಿಯುವಂತೆ ಪ್ರೇರೇಪಿಸಿ, ಅವರ ವೀರ ಪವಾಡಕ್ಕೆ ಹೆದರಿ ಅಪರಾಧವನ್ನು ಒಪ್ಪಿಕೊಂಡ ಸರದಾರ ಗೋಕಿಲ್ಯ ಎಂಬುವವನು ಯಾರು ಎಂದು ಖಚಿತವಾಗಿ ತಿಳಿಯಲು ಸಾಧ್ಯವಾಗಿಲ್ಲ. ಸಿರಾವನ್ನು ಆಳಿದ ಮುಸ್ಲಿಮರಲ್ಲಿ ಕೆಲವರು ಗಾಕುಲಿಖಾನ್, ದಾರಗಾಕುಲಿಖಾನ್ ಎಂದು ಇದ್ದಾರೆ. ಸಿರಾ ತಾಲ್ಲೂಕಿನ ಬರಗೂರ ಹೋಬಳಿಯ ಬರಗೂರ ತಾಮ್ರಶಾಸನದಲ್ಲಿ[6] ನವಾಬ ದಾರಗಾಕುಲಿಖಾನ್ ಎಂಬುವನ ಹೆಸರಿದೆ. ಆದರೆ ಅದು ನವಾಬದಾರ ಗಾಕುಲಿಖಾನ್ ಆಗಿರಬಹುದು ಎಂದು ಒಂದು ಊಹೆ. ಆತನನ್ನೇ ಈ ಶಾಸನದ ಗೋಕಿಲ್ಯ ಎಂದು ಭಾವಿಸುವುದಾದರೆ ಈ ಶಾಸನದ ಕಾಲವನ್ನು ಕ್ರಿ. ಶ. ೧೭೩೮ ಎಂದು ಒಪ್ಪಬಹುದು. ನವಾಬದಾರ ಗಾಕುಲಿಖಾನ್‌ನ ಉಲ್ಲೇಖವಿರುವ ಮೇಲೆ ಹೇಳಿದ ತಾಮ್ರಶಾಸನದ ಕಾಲ ಕ್ರಿ. ಶ. ೧೭೨೦. ಆ ನಂತರದ ಪಿಂಗಳ ಸಂವತ್ಸರವು ಕ್ರಿ. ಶ. ೧೭೩೮ರಲ್ಲಿ ಘಟಿಸಿತ್ತು.

ವೀಳ್ಯವನ್ನು ಕೊಟ್ಟು-ಪಡೆಯುವುದರ ಮೂಲಕ ಒಪ್ಪಂದಕ್ಕೆ ಬರುವುದು ನಮ್ಮಲ್ಲಿ ಮೊದಲಿನಿಂದ ಬಂದಿರುವ ಪದ್ಧತಿ ಕವಳ ಎನ್ನುವುದನ್ನೂ ವೀಳ್ಯಕ್ಕೆ ಸಮಾನಾರ್ಥದಲ್ಲೇ ಸ್ವೀಕರಿಸಬೇಕಾಗುತ್ತದೆ.

ಅಪರಾಧವನ್ನೊಪ್ಪಿಕೊಂಡ ಗೋಕಿಲ್ಯನಿಂದ ವೀಳ್ಯವನ್ನು ಪಡೆದ ಹನುಮದಾಸಾ, ಯೀರದಾಸಾ, ತುಳಸಿರಾಮದಾಸಾ ಎಂಬ ಮೂವರು ದೇಶಭಾಗದವರೂ ಆ ಸ್ಥಳದ ಮುದ್ರೆಕರ್ತರಲ್ಲಿಗೆ ಬಂದಾಗ, ಮುದ್ರೆಕರ್ತರು ಆ ಮೂವರೂ ಗುರು ವಾಂಛಲ್ಯಕ್ಕೆ ಕೀರ್ತಿ ತರಿಸಿದರು ಎಂದು ಮೆಚ್ಚಿ ಸಿರದ ಯಿರದಾಸನಿಗೆ ಭಾರಿಯಾದ ಬಿರುದನ್ನು ನೀಡಿದರು. 'ಹಳದಿ ಬಿಳದಿ ಭಾರಿಯಷ್ಟು ಬಿರುದನ್ನು ಕೊಟ್ಟದು' ಎಂಬುದಕ್ಕೆ ಗೋಪೀಚಂದನ, ಬಿಳಿಯ ನಾಮ ಮುಂತಾದ ವೈಷ್ಣವ ಲಾಂಛನಗಳು ಎಂದು ಭಾವಿಸಲಾಗಿದೆ.

ಬಿರುದನ್ನು ಪಡೆದ ಸಿರದ ಯೀರದಾಸ ಮುದ್ರೆಕರ್ತರಿಗೆ ಆ ಸ್ಥಳದ ಕವಳವನ್ನು ಕೊಟ್ಟಾಗ, ದೇಶ ಮುದ್ರೆಕರ್ತ ಮತ್ತು ದಳವಾಯಿ ಮುಂತಾದ ಕರ್ತರು ಕೂಡಿ

---

6. ಎ. ಕ, ೧೨, ಸಿರಾ ೧೧೨

ಸ್ಥಳದ ಕವಳವನ್ನಂತೂ ಕೊಟ್ಟೆ ಇನ್ನು ದಿಕ್ಕು ದೇಶಭಾಗದ ಕವಳವನ್ನೂ ನಮ್ಮ ಮುಖಾಂತರ ಕೊಡು ಎಂದಾಗ ಹಾನಗಲ್ಲ ಸ್ಥಳದಲ್ಲಿ ಸಮೆಕೊಮಾರ, ಗುಂಮಗಟ್ಟಿ ಬಿಯದಾಸೈಯ್ಯ, ಚರಪತ್ತಿ ರಾಮದಾಸೈಯ ಮತ್ತಿತರ ದೇಶಭಾಗಕ್ಕೆ ಸಹಾ ಯಿಾರದಾಸನು ದೇಶಭಾಗದ ಕವಳ ಕೊಟ್ಟನು. ಇದಕ್ಕಾಗಿ ಈ ದೇಶಭಾಗದವರನ್ನು ಯಾರೂ ಹಿಡಿದು ಕೇಳಲಾಗದು. ಕೇಳಿದರೆ ತಿರುಮಲ ತಾಥನ ಮುದ್ರೆಗೆ ಜವಾಬ್ದಾರರಾಗಿರುತ್ತಾರೆ.

ಸಿರದ ಯೀರದಾಸನಿಂದ ಸ್ಥಳದ ಒಪ್ಪಿಗೆ ಪಡೆದ ನಂತರ ಸುತ್ತಮುತ್ತಿನ ದೇಶಭಾಗದವರ ಒಪ್ಪಿಗೆಯನ್ನೂ ಮುದ್ರೆಕರ್ತರು ಪಡೆದರು. ಸಿರದ ಸುತ್ತಿನ ದೇಶಭಾಗದವರೆಲ್ಲರೂ ಮುಸವನೂರ ತಿರುಮಾಳಿಗೆಯ ಮುದ್ರೆಕರ್ತರನ್ನು ಒಪ್ಪಿಕೊಂಡರು.

ಈ ಶಾಸನದಲ್ಲಿ ಪ್ರಸ್ತಾಪಿತವಾಗಿರುವ ಊರುಗಳಲ್ಲಿ ಸಿರದ ವಿನಹ ಮತ್ತಾವ ಊರುಗಳನ್ನೂ ಖಚಿತವಾಗಿ ಗುರುತಿಸಲು ಸಾಧ್ಯವಾಗಿಲ್ಲ. ಈಗಿನ ತಾಲ್ಲೂಕು ಕೇಂದ್ರ ಶಿರಾವನ್ನು 'ಸಿರಾ' ಎಂದು ತಿಳಿಯಬಹುದು. ಶಾಸನದ ಪ್ರಕಾರ ತಿರುಮಾಳಿಗೆ (ದೇವಾಲಯ) ಇದ್ದ ಮುಸವನೂರು ಮತ್ತು ಹಾನಗಲ್ಲುಗಳನ್ನು ಚಿತ್ರದುರ್ಗ ಜಿಲ್ಲೆಯ ಜಗಳೂರು ತಾಲ್ಲೂಕಿನ ಮುಚನೂರು ಮತ್ತು ಹಾನಗಲ್ಲುಗಳಾಗಿರಬಹುದು ಎಂದು ಊಹಿಸಲಾಗಿದೆ.

ಶಾಸನದಲ್ಲಿ ಉಲ್ಲೇಖಿತವಾಗಿರುವ ಪಿಂಗಳ ಸಂವತ್ಸರವು ಕ್ರಿ. ಶ. ೧೭೩೮ ಆಗಿರಬಹುದೆಂದು ಕೆಳಕಂಡ ಕಾರಣಗಳಿಂದ ತಿಳಿಯಲಾಗಿದೆ. ಗಾಕುಲಿಖಾನ್ ಅಥವಾ ದಾರಗಾಕುಲಿಖಾನ್ ಎಂಬ ನವಾಬದಾರ ಅಥವಾ ನವಾಬನ ಉಲ್ಲೇಖವಿರುವ ಸಿರಾ ತಾಲ್ಲೂಕು ಬರಗೂರಿನ ತಾಮ್ರಶಾಸನದ ಕಾಲ ಕ್ರಿ. ಶ. ೧೭೨೦ ಮತ್ತು ಶಾಸನದ ಲಿಪಿ ಸ್ವರೂಪವು ಕ್ರಿ.ಶ. ೧೮ನೆಯ ಶತಮಾನದ ಲಿಪಿ ಸ್ವರೂಪದೊಂದಿಗೆ ಹೋಲುತ್ತದೆ. ಆದ್ದರಿಂದ ಈ ಶಾಸನದ ಕಾಲವು ಕ್ರಿ. ಶ. ೧೭೩೮ ಆಗಿರುವ ಸಾಧ್ಯತೆಗಳು ಹೆಚ್ಚು.

ಶಾಸನದಲ್ಲಿ ಬಳಸಿರುವ ಭಾಷೆಯು ಶುದ್ಧವಾಗಿಲ್ಲ. 'ಆ' ಕಾರದ ಬದಲಿಗೆ 'ಹ' ಕಾರ (ಆದುದ–ಹಾದದು, ಆ ಸ್ಥಳ-ಹಾ ಸ್ತಾಳ, ಇತ್ಯಾದಿ)ವನ್ನೂ ಹೆದರಿ ಎನ್ನುವುದಕ್ಕೆ ಬದಲಿಗೆ ಯಧರಿ ಎಂದೂ-ಅಶುದ್ಧ ಪ್ರಯೋಗಗಳಿವೆ.

ಈ ಶಾಸನದಲ್ಲಿ ಉಲ್ಲೇಖಿತವಾಗಿರುವ ಮುಸವನೂರಿಗೂ ಈ ಶಾಸನ ದೊರೆತ ರಂಗನಾಥಪುರ ಗ್ರಾಮಕ್ಕೂ ಇರುವ ಸಂಬಂಧವನ್ನೂ ಮುವನೂರು, ಹಾನಗಲ್ಲು ಮತ್ತಿತರ ಉಲ್ಲೇಖಿತ ಸ್ಥಳಗಳನ್ನೂ ಸರಿಯಾಗಿ ಪತ್ತೆಮಾಡುವ ಕಾರ್ಯ ಆಗಬೇಕಾಗಿದೆ.

ಕಟ್ಟಿಮನೆ, ಸಗರದ ವುಪ್ಪಾರದೈವದವರು, ದೇಶಭಾಗದವರಿಗಿದ್ದ ಮುದ್ರೆಕರ್ತರ ಬಗೆಗೆ ಈ ಶಾಸನವು ಸ್ಪಷ್ಟವಾಗಿ ತಿಳಿಸುತ್ತದೆ.